ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಬೀದರ್‌ನ ಔರಾದ್(ಬಾ) ಪಟ್ಟಣದ ಪ್ರವಾಸಿ ಮಂದಿರದ ಜಮೀನಿನ ಬಗ್ಗೆ

ಡಾ. ಚಂದ್ರಶೇಖರ್ ಬಿ. ಪಾಟೀಲ್ (ಪದವೀಧರರ ಕ್ಷೇತ್ರ) -

ಶ್ರೀ ತಿಪ್ಪಣ್ಣ ಕಮಕನೂರ (ನಾಮನಿರ್ದೇಶನ ಹೊಂದಿದವರು) -

ಶ್ರೀ ರಘುನಾಥ್‌ರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು)-

ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ) -

174 (1360+1367+1368+1326) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಬೀದರ್ ಜಿಲ್ಲೆಯ ಔರಾದ್ (ಬಾ) ತಾಲ್ಲೂಕಿನ ಔರಾದ್ ಪಟ್ಟಣದಲ್ಲಿ ಲೋಕೋಪಯೋಗಿ ಪ್ರವಾಸಿ ಮಂದಿರವು ಅಸ್ತಿತ್ವದಲ್ಲಿದೆಯೇ ; ಹಾಗೂ ಎಷ್ಟು ಎಕರೆ ಜಾಗವನ್ನು ಭೂಸ್ವಾ ೀನ ಮಾಡಿಕೊಂಡಿರುವುದು ಯಾವಾಗ; ಕಳೆದ 5 ವರ್ಷಗಳಲ್ಲಿ ಈ ಕಟ್ಟಡದಲ್ಲಿ ತಂಗಿರುವವರ ಹೆಸರು, ತಂಗಿದ್ದ ದಿನಾಂಕವಾರು ಮಾಹಿತಿ ನೀಡುವುದು ;

(ಆ) ಈ ಕಟ್ಟಡವನ್ನು ಯಾವ ಸರ್ವೆ ನಂಬರ್‌ನಲ್ಲಿ ನಿರ್ಮಿಸಲಾಗಿದೆ ; ಯಾರಿಂದ ಎಷ್ಟು ವಿಸ್ತೀರ್ಣದ ಜಮೀನನ್ನು ಯಾವ ದಿನಾಂಕದಂದು ಸ್ವಾಧೀನ ಪಡಿಸಿಕೊಳ್ಳಲಾಗಿದೆ ; ಭೂಸ್ವಾಧೀನ ಪಡಿಸಿಕೊಂಡ ಜಾಗಕ್ಕೆ ಪರಿಹಾರ ಧನ ವಿತರಿಸಲಾಗಿದೆಯೇ ; ಯಾವಾಗ ವಿತರಿಸಲಾಗಿದೆ ; ಭೂಸ್ವಾಧೀನ ಪಡಿಸಿಕೊಂಡಿದ್ದ ಜಮೀನಿಗಿಂತ ಹೆಚ್ಚು ಜಮೀನನ್ನು ಅನಧಿಕೃತವಾಗಿ ಒತ್ತುವರಿ ಮಾಡಿಕೊಂಡು ಕಾಂಪೌಂಡ್ ನಿರ್ಮಾಣ ಮಾಡಿರುವುದು ನಿಜವೇ ; ಪ್ರಸ್ತುತ ಈ ಜಾಗದ ಮಾಲೀಕತ್ವ ಯಾರ ಹೆಸರಿನಲ್ಲಿದೆ ; ಭೂ ದಾಖಲೆ ಒದಗಿಸುವುದು;

(ಇ) ಪ್ರವಾಸಿ ಮಂದಿರದ ಸುತ್ತಲೂ ಎಷ್ಟು ವಿಸ್ತೀರ್ಣದ ಜಮೀನಿನಲ್ಲಿ ಕಾಂಪೌಂಡ್ ನಿರ್ಮಿಸಲಾಗಿದೆ ; ಈ ಭೂಮಿಯನ್ನು ಭೂಸ್ವಾಧೀನ ಪಡಿಸಿಕೊಳ್ಳಲಾಗಿದೆಯೇ ಅಥವಾ ಭೂಸ್ವಾಧೀನ ಪ್ರಕ್ರಿಯೆಗಳು ನಡೆದಿದ್ದಲ್ಲಿ ಯಾವ ಯಾವ ವರ್ಷಗಳಲ್ಲಿ ನಡೆದಿದೆ ಎಂಬ ಪ್ರಸ್ತಾವನೆಗಳ ಪ್ರತಿ ನೀಡುವುದು ; (ಜಮೀನಿನ ಮಾಲೀಕರಿಗೆ ನೀಡಿರುವ ನೋಟೀಸ್ ಅಥವಾ ಪತ್ರ ಸೇರಿದಂತೆ) ನಡೆಯದಿದ್ದಲ್ಲಿ, ಈ ಜಾಗದ ಮಾಲೀಕರು ಯಾರು ;

(ಈ) ಸದರಿ ಜಾಗವನ್ನು ಕಾನೂನು ಪ್ರಕಾರ ಸ್ವಾಧೀನಪಡಿಸಿಕೊಳ್ಳದೇ ಕಾಂಪೌಂಡ್ ನಿರ್ಮಿಸಲಾಗಿದೆಯೇ ; ಹೌದಾದಲ್ಲಿ, ಇದಕ್ಕೆ ಕಾರಣರಾದ ಅಧಿಕಾರಿ/ನೌಕರರ ವಿರುದ್ಧ ಕೈಗೊಂಡಿರುವ ಅಥವಾ ಕೈಗೊಳ್ಳುವ ಕ್ರಮಗಳೇನು ;

(ಉ) ಒತ್ತುವರಿ ಮಾಡಿಕೊಂಡಿರುವ ಹೆಚ್ಚುವರಿ ಜಮೀನನ್ನು ತೆರವುಗೊಳಿಸುವಂತೆ ಕೋರಿ ಜಮೀನು ಮಾಲೀಕರು ಮನವಿ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಈವರೆಗೆ ಒತ್ತುವರಿ ತೆರವುಗೊಳಿಸಿ ಜಮೀನನ್ನು ಮಾಲೀಕರಿಗೆ ಹಸ್ತಾಂತರಿಸದೇ ಇರಲು ಕಾರಣಗಳೇನು ; ಸದರಿ ಜಾಗವನ್ನು ಮಾಲೀಕರಿಗೆ ಹಿಂದಿರುಗಿಸಲು ಸರ್ಕಾರ ಕೈಗೊಂಡ ಅಥವಾ ಇನ್ನು ಮುಂದಾದರೂ ಕೈಗೊಳ್ಳುವ ಕ್ರಮಗಳ ವಿವರ ನೀಡುವುದು ?